KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮೇ ೧೯, ೨೦೧೧ (ವೈಶಾಖ ೨೯ ಶಕ ವರ್ಷ ೧೯೩೩) | ಸಂಚಿಕೆ ೨೦ |
|---|---|---|

## ಭಾಗ–೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಆರ್ಥಿಕ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆಇ 30 ಆಖಇ 2011, ಬೆಂಗಳೂರು, ದಿನಾಂಕ:27.04.2011**

ಶ್ರೀ ನಜೀಬುಲ್ಲಾ ಖಾನ್, ಸಹಾಯಕ ಖಜಾನಾಧಿಕಾರಿ, ಜಿಲ್ಲಾ ಖಜಾನೆ, ಹಾವೇರಿ ಇವರನ್ನು ಜಿಲ್ಲಾ ಅಧಿಕಾರಿ (ಅಲ್ಪ ಸಂಖ್ಯಾತರು) ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ, ಶಿವಮೊಗ್ಗ–ಹುದ್ದೆಗೆ ನೇಮಿಸುವ ಸಲುವಾಗಿ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.541

**ಎಂ.ಎಸ್. ಶಿವರಾಮ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

### ಕಂದಾಯ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 762 ಎಎಸ್‌ಡಿ 2010, ಬೆಂಗಳೂರು, ದಿನಾಂಕ:26.04.2011**

ಶ್ರೀ ಎಸ್.ಎಸ್. ದೊಡ್ಡಮನಿ, ನಿವೃತ್ತ ತಹಶೀಲ್ದಾರ್ ಇವರ ಖಾತೆಯಲ್ಲಿರುವ ಒಟ್ಟು 233 ದಿನಗಳ ಗಳಿಕೆ ರಜೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, ನಿಯಮ 118 (ಎ)(1) ಹಾಗೂ (4)ರನ್ವಯ ನಗದೀಕರಿಸಲು ಮಂಜೂರಾತಿ ನೀಡಿದೆ.

ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಗಳು ಇರುವುದಿಲ್ಲವೆಂದು ಈ ಮೂಲಕ ದೃಢೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.542

**ಎಸ್. ಬಾಲಕೃಷ್ಣಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

### ಕಂದಾಯ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕಂಇ 04 ಎಟಿಎಸ್ 2011, ಬೆಂಗಳೂರು, ದಿನಾಂಕ:29.04.2011**

ಸರ್ಕಾರದ ಇದೇ ಸಮ ಸಂಖ್ಯೆಯ ದಿನಾಂಕ:23.04.2011ರ ಅಧಿಸೂಚನೆಯಲ್ಲಿರುವ ಉಡುಪಿ ಎನ್ನುವ ಬದಲಾಗಿ ಹಾವೇರಿ ಹಾಗೂ ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.543

**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

## ಯುವಜನ ಸೇವಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಯುಸೇಇ 93 ಸಮನ 11, ಬೆಂಗಳೂರು, ದಿನಾಂಕ:30.04.2011**

ಅಧಿಸೂಚನೆ ಸಂಖ್ಯೆ: ಸಿಆಸುಇ 39 ಆಸೇನಿ 2010, ದಿನಾಂಕ:01.12.2010ರ ಮೇರೆಗೆ ದಿನಾಂಕ:30.04.2011ರ ಅಪರಾಹ್ನ ವಯೋ ನಿವೃತ್ತಿ ಹೊಂದುವ ಶ್ರೀ ಶಿವನಂಜಯ್ಯ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರ ಸ್ಥಾನದಲ್ಲಿ ಶ್ರೀ ಬಿ.ಎನ್. ಸುರೇಶ್, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ನಿರ್ದೇಶಕರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಬೆಂಗಳೂರು ಇವರನ್ನು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕ ಹುದ್ದೆಯಲ್ಲಿ ತಾತ್ಕಾಲಿಕವಾಗಿ ಹೆಚ್ಚುವರಿ ಪ್ರಭಾರದಲ್ಲಿರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.544

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಯುವಜನ ಸೇವಾ ಇಲಾಖೆ.

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 07 ಡಿಜಿಎಂ 2011, ಬೆಂಗಳೂರು, ದಿನಾಂಕ:26.04.2011**

ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಗ್ರೂಪ್–ಎ ಕಿರಿಯ ಶ್ರೇಣಿಯ ಶಿಕ್ಷಣಾಧಿಕಾರಿ ವೃಂದದ ಹುದ್ದೆಗಳಲ್ಲಿ ನಿಯಮ–32ರಡಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅಧಿಕಾರಿಗಳಿಗೆ ಅಧಿಸೂಚನೆ ಸಂಖ್ಯೆ: ಇಡಿ 9 ಡಿಪಿಐ 2007, ದಿನಾಂಕ:24.03.2007ರಂದು ಸ್ಥಾನಪನ್ನ ಬಡ್ತಿಯನ್ನು ನೀಡಲಾಗಿರುತ್ತದೆ. ದಿನಾಂಕ:18.01.2007 ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಡವಳಿಯಲ್ಲಿ ಶ್ರೀ ಜೆ.ಜೆ. ದೊಡ್ಡಮನಿ, ಇವರು ಪದೋನ್ನತಿಗೆ ಅರ್ಹತೆ ಹೊಂದಿದ್ದರೂ ಇವರ ಮೇಲೆ ಶಿಸ್ತು ಕ್ರಮ ಬಾಕಿ ಇದ್ದ ಹಿನ್ನೆಲೆಯಲ್ಲಿ ಬಡ್ತಿಗಾಗಿ ಇವರನ್ನು ಪರಿಗಣಿಸಿರಲಿಲ್ಲ. ಸದರಿಯವರನ್ನು ದಿನಾಂಕ:02.12.2010 ರಂದು ಆಪಾದನೆಗಳಿಂದ ದೋಷಮುಕ್ತಗೊಳಿಸಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜೆ.ಜೆ. ದೊಡ್ಡಮನಿ, ಹಿರಿಯ ಉಪನ್ಯಾಸಕರು, ಡಯಟ್, ವಿಜಾಪೂರ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವೇತನ, ಪದೋನ್ನತಿ ಮತ್ತು ವಿಶ್ರಾಂತಿ ವೇತನಗಳ ಪರಿಷ್ಕರಣೆ) ನಿಯಮಗಳು, 1978ರ ನಿಯಮ 2(1)(ಎ) ನಿಯಮದನ್ವಯ ಗ್ರೂಪ್–'ಎ' ಕಿರಿಯ ವೇತನ ಶ್ರೇಣಿ ರೂ.7400–13120 ರಲ್ಲಿ ದಿನಾಂಕ:24.03.2007 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸ್ಥಾನಪನ್ನ ಬಡ್ತಿ ನೀಡಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಮತ್ತು ಸ್ಥಳದಲ್ಲಿಯೇ ಮುಂದಿನ ಆದೇಶದವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.545

**ಎಸ್.ಹೆಚ್. ಕುರಿಯವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸಮಿತಿಗಳು)

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಹೆಚ್‌ಡಿ 194 ಎಸ್‌ಎಸ್‌ಟಿ 2011, ಬೆಂಗಳೂರು, ದಿನಾಂಕ:02.05.2011**

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಸಾರ್ವತ್ರಿಕ ಚುನಾವಣೆ–2011ರ ಪ್ರಯುಕ್ತ ದಿನಾಂಕ:25.04.2011ರಂದು ನಡೆಯಲಿರುವ ಮತದಾನದ ಸಮಯದಲ್ಲಿ ಕಾನೂನು, ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಸಲುವಾಗಿ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನಲ್ಲಿ ಸೆಕ್ಟೋರಲ್ ಮ್ಯಾಜಿಸ್ಟ್ರೇಟ್ (ವಿಶೇಷ ಕಾರ್ಯ ನಿರ್ವಾಹಕ ದಂಡಾಧಿಕಾರಿ) ನೇಮಿಸುವ ಅಗತ್ಯವಿರುವುದರಿಂದ ದಂಡ ಪ್ರಕ್ರಿಯಾ ಸಂಹಿತೆ 1973 (ಕೇಂದ್ರ ಕಾಯಿದೆ ಸಂಖ್ಯೆ 2–1974)ರ ಕಲಂ 21ರಲ್ಲಿನ ಅಧಿಕಾರವನ್ನು ಚಲಾಯಿಸಿ, ಸದರಿ ಸಂಹಿತೆಯಡಿ ನೀಡಬಹುದಾದ ಎಲ್ಲಾ ಅಧಿಕಾರಗಳನ್ನು ನೀಡಿ, ಈ ಕೆಳಕಂಡ ಪಟ್ಟಿಯ ಕಲಂ (2)ರಲ್ಲಿ ನಮೂದಿಸಿರುವ ಹುದ್ದೆಯ ಅಧಿಕಾರಿಗಳನ್ನು ಸೆಕ್ಟರಲ್ ಮ್ಯಾಜಿಸ್ಟ್ರೇಟರುಗಳನ್ನಾಗಿ (ವಿಶೇಷ ಕಾರ್ಯ ನಿರ್ವಾಹಕ ದಂಡಾಧಿಕಾರಿ) ಕಲಂ (3)ರಲ್ಲಿ ನಮೂದಿಸಿರುವ ಕ್ಷೇತ್ರವ್ಯಾಪ್ತಿಗೆ ಈ ಕೂಡಲೇ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ | ಕ್ಷೇತ್ರ ವ್ಯಾಪ್ತಿ (ತಾಲ್ಲೂಕುವಾರು) |
|---|---|---|
| 1. | ಶ್ರೀ ಎಸ್. ಸತೀಶ್, ಅಧೀನ ಕಾರ್ಯದರ್ಶಿಗಳು, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ | ಭದ್ರಾವತಿ |
| 2. | ಶ್ರೀ ಬಾಲ್ಯಾನಾಯ್ಕ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ. | ಭದ್ರಾವತಿ |
| 3. | ಶ್ರೀ ಯು. ಚಂದ್ರಾನಾಯ್ಕ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಶಿವಮೊಗ್ಗ | ಭದ್ರಾವತಿ |
| 4. | ಶ್ರೀ ಕೆ.ಎಲ್. ಸುಬ್ರಹ್ಮಣ್ಯ, ಸಹಾಯಕ ಕಾರ್ಯದರ್ಶಿಗಳು–1, ಜಿಲ್ಲಾ ಪಂಚಾಯಿತಿ, ಶಿವಮೊಗ್ಗ. | ಭದ್ರಾವತಿ |

ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಶಿವಮೊಗ್ಗ ಜಿಲ್ಲೆರವರು ಹೊರಡಿಸಿರುವ ಆದೇಶ ಸಂಖ್ಯೆ: ಎಂಎಜಿ(1) ವಿವ 02/2011–12, ದಿನಾಂಕ:28.04.2011ಕ್ಕೆ ಸರ್ಕಾರದ ಘಟನೋತ್ತರ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ , ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್.546

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 64 ಪೊಸಿಪ 2010, ಬೆಂಗಳೂರು, ದಿನಾಂಕ:29.04.2011**

ಪೊಲೀಸ್ ಇಲಾಖೆಯ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ವೈಜ್ಞಾನಿಕ ಅಧಿಕಾರಿ, ವಿಷ ವಿಜ್ಞಾನ ವಿಭಾಗದ ಒಟ್ಟು 02 ಹುದ್ದೆಗಳ ನೇಮಕಾತಿ ಬಗ್ಗೆ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ) ಸಾಮಾನ್ಯ ನಿಯಮಗಳು, 2001 ರಡಿಯಲ್ಲಿ ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಿ, ಅಭ್ಯರ್ಥಿಗಳು ಸದರಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಅಂತಿಮ ಆಯ್ಕೆ ಪಟ್ಟಿಗಳನ್ನು ಆಯೋಗದ ಅಧಿಸೂಚನೆ ಸಂಖ್ಯೆ: PSC/18/RTB/2005 ದಿನಾಂಕ:30.06.2010ರಲ್ಲಿ ಪ್ರಕಟಿಸಲಾಗಿದ್ದು, ಈ ಕೆಳಕಂಡ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿರುತ್ತದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ ವರ್ಗ |
|---|---|---|
| 1. | PRAVEEN UMESH SANGANALMATH<br>TOXICOLOGY SECTION<br>FORENSIC SCIENCE LABORATORY,<br>POLICE DEPT. MADIVALA, BANGALORE-560 068 | GM |
| 2. | SUJATHA K.M.<br>SCIENTIFIC ASST. FORENSIC SCIENCE LABORATORY, MADIVALA, BANGALORE-560 068. | SC |

ಮೇಲ್ಕಂಡ ಅಭ್ಯರ್ಥಿಗಳನ್ನು ರೂ.11400–21600ರ ವೇತನ ಶ್ರೇಣಿಯ ವೈಜ್ಞಾನಿಕ ಅಧಿಕಾರಿ, ವಿಷ ವಿಜ್ಞಾನ ವಿಭಾಗದ ಹುದ್ದೆಗೆ ಪರಿವೀಕ್ಷಣೆಯ ಮೇಲೆ (on probation) ಈ ಮೂಲಕ ನೇಮಕ ಮಾಡಲಾಗಿದೆ.

ಈ ಅಭ್ಯರ್ಥಿಗಳ ನೇಮಕಾತಿ ಮತ್ತು ಸೇವಾ ನಿಯಮಗಳು ಈ ಬಗ್ಗೆ ಪ್ರಸ್ತುತ ಜಾರಿಯಲ್ಲಿರುವ ಹಾಗೂ ಮುಂದೆ ಹೊರಡಿಸಬಹುದಾದ ನಿಯಮಗಳಿಗೆ ಮತ್ತು ಆದೇಶಗಳಿಗೆ ಒಳಪಟ್ಟಿರುತ್ತದೆ.

ಈ ಪರೀಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ವೈಜ್ಞಾನಿಕ ಅಧಿಕಾರಿ, ವಿಷ ವಿಜ್ಞಾನ ವಿಭಾಗದ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು ಮತ್ತು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸತಕ್ಕದ್ದು.

ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಯು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ನಂ.2, ನೃಪತುಂಗ ರಸ್ತೆ, ಬೆಂಗಳೂರು–560001 ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಗೊಳಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.547

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 18 ಆಸೇಇ 2011, ಬೆಂಗಳೂರು, ದಿನಾಂಕ:29.04.2011**

ಅಧಿಸೂಚನೆ ಸಂಖ್ಯೆ: ಸಿಆಸುಇ 13 ಆಸೇವ 2008 ದಿನಾಂಕ:24.05.2008ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ) ನಿಯಮಾವಳಿಗಳು 1997 ರ ಅಡಿಯಲ್ಲಿ 2006ನೇ ಬ್ಯಾಚ್‌ನ ಕೆ.ಎ.ಎಸ್. ಗ್ರೂಪ್–ಎ ಕಿರಿಯ ಶ್ರೇಣಿ ಹುದ್ದೆಗೆ ನೇಮಕಗೊಂಡ ಕೆಳಕಂಡ 20 ಪರೀಕ್ಷಾರ್ಥ ಅಧಿಕಾರಿಗಳು 2 ವರ್ಷದ ಪರೀಕ್ಷಾರ್ಥ ಅವಧಿಯನ್ನು ಅವರುಗಳ ಹೆಸರಿನ

ಮುಂದೆ ಸೂಚಿಸಿರುವ ದಿನಾಂಕಗಳಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 5(1)(ಎ) ರ ಪ್ರಕಾರ ಘೋಷಿಸಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ಹಾಜರಾದ ದಿನಾಂಕ | 2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ಪೂರೈಸಿದ ದಿನಾಂಕ |
|---|---|---|---|
| 1. | ಚಂದ್ರಶೇಖರ್ ಎನ್.<br>ಆಡಳಿತಾಧಿಕಾರಿ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು. | 24.05.2008 (ಪೂರ್ವಾಹ್ನ) | 23.05.2010 |
| 2. | ಸುರೇಶ್ ಬಿ. ಇಟ್ನಾಳ್<br>ವಿಶೇಷ ಭೂಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ರಾಣೆಬೆನ್ನೂರು, ಹಾವೇರಿ ಜಿಲ್ಲೆ. | 30.05.2008 (ಅಪರಾಹ್ನ) | 30.05.2010 |
| 3. | ಪ್ರಭು ಜಿ.<br>ಉಪವಿಭಾಗಾಧಿಕಾರಿ, ಪಾಂಡವಪುರ ಉಪವಿಭಾಗ, ಮಂಡ್ಯ ಜಿಲ್ಲೆ. | 30.05.2008 (ಅಪರಾಹ್ನ) | 30.05.2010 |
| 4. | ಡಾ: ಕೆ.ಎನ್. ಅನುರಾಧ,<br>ಉಪವಿಭಾಗಾಧಿಕಾರಿ, ಭಟ್ಕಳ ಉಪವಿಭಾಗ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ | 30.05.2008 (ಅಪರಾಹ್ನ) | 30.05.2010 |
| 5. | ನಾಗರಾಜ ಎನ್.ಎಂ.<br>ಉಪವಿಭಾಗಾಧಿಕಾರಿ, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ | 03.06.2008 (ಪೂರ್ವಾಹ್ನ) | 02.06.2010 |
| 6. | ಬಸವರಾಜು ಎ.ಬಿ.<br>ಉಪವಿಭಾಗಾಧಿಕಾರಿ, ಕೊಳ್ಳೆಗಾಲ ಉಪವಿಭಾಗ, ಕೊಳ್ಳೆಗಾಲ, ಚಾಮರಾಜನಗರ ಜಿಲ್ಲೆ. | 30.05.2008 (ಅಪರಾಹ್ನ) | 30.05.2010 |
| 7. | ರೂಪಾ ಐ.ಪಿ.<br>ಆಡಳಿತಾಧಿಕಾರಿ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. | 30.05.2008 (ಅಪರಾಹ್ನ) | 30.05.2010 |
| 8. | ಎಂ. ಶಿಲ್ಪ<br>ಆಡಳಿತಾಧಿಕಾರಿ, ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಯಮಿತ (ಕರ್ನಾಟಕ ಭೂಸೇನಾ ನಿಗಮ), ಬೆಂಗಳೂರು | 26.05.2008 (ಪೂರ್ವಾಹ್ನ) | 25.05.2010 |
| 9. | ನವೀನ್ ಕುಮಾರ್ ರಾಜು ಎಸ್.<br>ಉಪವಿಭಾಗಾಧಿಕಾರಿ, ಕುಮಟಾ ಉಪವಿಭಾಗ, ಕುಮಟಾ, ಉತ್ತರ ಕನ್ನಡ ಜಿಲ್ಲೆ, | 06.06.2008<br>(ಪೂರ್ವಾಹ್ನ) | 05.06.2010 |
| 10. | ಡಾ: ಮಹೇಶ್ ಎಂ.<br>ಉಪಕಾರ್ಯದರ್ಶಿ–2<br>ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | 07.06.2008 (ಪೂರ್ವಾಹ್ನ) | 06.06.2010 |
| 11. | ಸೋಮಶೇಖರ್ ಎಸ್.ಜಿ.<br>ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ., ಬೆಂಗಳೂರು | 26.05.2008 (ಪೂರ್ವಾಹ್ನ) | 25.05.2010 |
| 12. | ಡಾ: ವಾಸಂತಿ ಅಮರ್ ಬಿ.ವಿ.,<br>ಯೋಜನಾ ವ್ಯವಸ್ಥಾಪಕರು (ಅಭಿವೃದ್ಧಿ) ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು | 24.05.2008 (ಪೂರ್ವಾಹ್ನ) | 23.05.2010 |
| 13. | ಲಿಂಗಮೂರ್ತಿ ಜಿ.<br>ಉಪವಿಭಾಗಾಧಿಕಾರಿ, ಹುಣಸೂರು ಉಪವಿಭಾಗ, ಹುಣಸೂರು, ಮೈಸೂರು ಜಿಲ್ಲೆ. | 24.05.2008 (ಪೂರ್ವಾಹ್ನ) | 23.05.2010 |
| 14. | ರಂಗಪ್ಪ ಎಸ್.<br>ಉಪವಿಭಾಗಾಧಿಕಾರಿ, ಮಂಡ್ಯ ಉಪವಿಭಾಗ, ಮಂಡ್ಯ | 31.05.2008 (ಪೂರ್ವಾಹ್ನ) | 30.05.2010 |

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ಹಾಜರಾದ ದಿನಾಂಕ | 2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ಪೂರೈಸಿದ ದಿನಾಂಕ |
|---|---|---|---|
| 15. | ಪ್ರಸನ್ನ ಹೆಚ್. ಉಪವಿಭಾಗಾಧಿಕಾರಿ, ಬಸವಕಲ್ಯಾಣ ಉಪವಿಭಾಗ, ಬಸವಕಲ್ಯಾಣ, ಬೀದರ್ ಜಿಲ್ಲೆ. | 24.05.2008 (ಪೂರ್ವಾಹ್ನ) | 23.05.2010 |
| 16. | ಇಬ್ರಾಹಿಂ ಮೈಗೂರ್, ವಿಶೇಷ ಭೂಸ್ವಾಧೀನಾಧಿಕಾರಿ, ಕೆ.ಐ.ಎ.ಡಿ.ಬಿ. ಬೆಂಗಳೂರು. | 30.05.2008 (ಅಪರಾಹ್ನ) | 30.05.2010 |
| 17. | ಪದ್ಮ ಬಸವಂತಪ್ಪ ವಿಶೇಷ ಭೂಸ್ವಾಧೀನಾಧಿಕಾರಿ, ಕರ್ನಾಟಕ ಗೃಹ ಮಂಡಳಿ, ಹುಬ್ಬಳ್ಳಿ | 06.06.2008 (ಪೂರ್ವಾಹ್ನ) | 05.06.2010 |
| 18. | ಶಶಿಧರ್ ಕುರೇರ, ಉಪವಿಭಾಗಾಧಿಕಾರಿ, ತರೀಕೆರೆ, ಉಪವಿಭಾಗ, ಚಿಕ್ಕಮಗಳೂರು ಜಿಲ್ಲೆ. | 31.05.2008 (ಪೂರ್ವಾಹ್ನ) | 30.05.2010 |
| 19. | ಸದಾಶಿವ ಪ್ರಭು ಬಿ. ಉಪವಿಭಾಗಾಧಿಕಾರಿ, ಕುಂದಾಪುರ ಉಪವಿಭಾಗ, ಕುಂದಾಪುರ, ಉಡುಪಿ ಜಿಲ್ಲೆ. | 04.06.2008 (ಪೂರ್ವಾಹ್ನ) | 03.06.2010 |
| 20. | ಪ್ರಕಾಶ್ ಜಿ.ಟಿ. ನಿಟ್ಟಾಲಿ ವಿಶೇಷ ಭೂಸ್ವಾಧೀನಾಧಿಕಾರಿ, ಹಿಪ್ಪರಗಿ (ಯೋಜನೆ (ಆರ್ & ಆರ್), ಅಥಣಿ, ಬೆಳಗಾಂ ಜಿಲ್ಲೆ. | 31.05.2008 (ಪೂರ್ವಾಹ್ನ) | 30.05.2010 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್.548

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 67 ಎಸ್‌ಐಎಸ್ 2011, ಬೆಂಗಳೂರು, ದಿನಾಂಕ:04.05.2011**

ಇದೇ ಸಮಸಂಖ್ಯೆಯ ದಿನಾಂಕ:06.04.2011ರ ಅಧಿಸೂಚನೆಯಲ್ಲಿ ಶ್ರೀ ಸುಭೋದ್ ಯಾದವ್, ಭಾ.ಆ.ಸೇ., ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಪ್ರಸಕ್ತ 2010–11ನೇ ಬ್ಲಾಕ್ ಅವಧಿಯಲ್ಲಿ ಅವರ ಸ್ವಗ್ರಾಮವಾದ ಕಾನ್ಪುರ್ (ಉತ್ತರ ಪ್ರದೇಶ)ಗೆ ಹೋಗಿ–ಬರಲು ಸ್ವಗ್ರಾಮ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದ್ದು, ಈ ಸಂಬಂಧ ಸದರಿಯವರಿಗೆ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: O.M.F.No. 14028/4/2009 (Estt.(L). ಹಾಗೂ 11019/24/2005-AIS-III, ದಿನಾಂಕ:03.11.2009ರ ಪತ್ರದಲ್ಲಿ ನೀಡಿರುವ ಸ್ಪಷ್ಟನೆ ಹಿನ್ನೆಲೆಯಲ್ಲಿ 10 ದಿನಗಳ ಗಳಿಕೆ ರಜೆಯ ನಗದೀಕರಣ ಸೌಲಭ್ಯವನ್ನು ಉಪಯೋಗಿಸಿಕೊಳ್ಳಲು ಸಹ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶ್ರೀನಿವಾಸ ಮೂರ್ತಿ**

ಪಿ.ಆರ್.549

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 275 ಆಸೇವ 10, ಬೆಂಗಳೂರು, ದಿನಾಂಕ:04.05.2011**

ಶ್ರೀ ಜಿ.ಬಿ. ಹಿರೇಮಣಿಯವರ್ ನಿವೃತ್ತ ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರನ್ನು ಮಾನ್ಯ ಸಮಾಜ ಕಲ್ಯಾಣ, ಬಂದೀಖಾನೆ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಗುತ್ತಿಗೆ ಆಧಾರದ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಸಮಾಜ ಕಲ್ಯಾಣ, ಬಂದೀಖಾನೆ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 15(1)(ಬಿ) (iii) ರನ್ವಯ ನೇಮಿಸಲಾಗಿದೆ.

ಶ್ರೀ ಜಿ.ಬಿ. ಹಿರೇಮಣಿಯವರ್ ಇವರ ಗುತ್ತಿಗೆ ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತುಗಳ ಬಗ್ಗೆ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್.550

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಸಿಆಸುಇ 88 ಸೇಲೋಯು 2011, ಬೆಂಗಳೂರು, ದಿನಾಂಕ:05.05.2011**

ಶ್ರೀ ಎಸ್.ವಿ.ಎಂ. ಷಾಖಾದ್ರಿ, ಕಾರ್ಯಪಾಲಕ ಇಂಜಿನಿಯರ್ ಇವರ ಸೇವೆಯನ್ನು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇಲ್ಲಿ ಖಾಲಿ ಇರುವ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಮರು ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ ಸಮಸಂಖ್ಯೆಯ ಅಧಿಸೂಚನೆಯನ್ನು ದಿನಾಂಕ:30.04.2011 ರಂದು ಹೊರಡಿಸಲಾಗಿದೆ. ಈ ಅಧಿಸೂಚನೆಯ 7ನೇ ಸಾಲಿನಲ್ಲಿರುವ 'ಸಹಾಯಕ ಕಾರ್ಯಪಾಲಕ' ಎಂಬುದನ್ನು 'ಕಾರ್ಯಪಾಲಕ' ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**

ಪಿ.ಆರ್.551

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು)

**PERSONNEL AND ADMINISTRATIVE REFORMS SECRETARIAT**

**NOTIFICATION**

**NO. DPAR 671 SAS 2010, Bangalore, Dated 4th May, 2011**

Sri K.P. Mohan Raj, IAS (KN 2007), Assistant Commissioner, Savanur Sub-Division, Savanur is promoted to officiate in the Senior Time Scale of IAS carrying the pay scale of Rs.15600-39100 plus Grade Pay of Rs.6600/- with immediate effect and continued until further orders as Senior Assistant Commissioner, Savanur Sub-Division, Savanur.

By Order and in the Name of the Governor of Karnataka,

**N. SRINIVASA MURTHY**

PR-552

Under Secretary to Government,

D.P. & A.R. (Services-I)

**ಇಂಧನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಎನ್ 59 ಸಮನ್ವಯ 2011, ಬೆಂಗಳೂರು, ದಿನಾಂಕ:28.04.2011**

ಡಾ: ರಾಜು, ಭಾ.ಅ.ಸೇ. ಪ್ರಧಾನ ವ್ಯವಸ್ಥಾಪಕರು, ಕ್ರೆಡಲ್ ಇವರನ್ನು ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್ಎಫ್ಪಿ 2011 ದಿನಾಂಕ:26.04.2011ರನ್ವಯ ಬನ್ನೇರುಘಟ್ಟ ಜೈವಿಕ ಉದ್ಯಾನ ವನಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ನಿರ್ದೇಶಕರಾಗಿ ವರ್ಗಾವಣೆ ಮಾಡಲಾಗಿದೆ.

ಆದ್ದರಿಂದ ಡಾ: ರಾಜು, ಭಾ.ಅ.ಸೇ., ಪ್ರಧಾನ ವ್ಯವಸ್ಥಾಪಕರು, ಕ್ರೆಡಲ್ ಇವರನ್ನು ಕ್ರೆಡಲ್‌ನ ಪ್ರಧಾನ ವ್ಯವಸ್ಥಾಪಕರ ಹುದ್ದೆಯ ಕರ್ತವ್ಯದಿಂದ ದಿನಾಂಕ:28.04.2011ರ ಅಪರಾಹ್ನದಿಂದ ಜಾರಿಗೆ ಬರುವಂತೆ ಬಿಡುಗಡೆಗೊಳಿಸಲಾಗಿದೆ. ಸದರಿ ಅಧಿಕಾರಿಯವರು ತಮ್ಮ ಕರ್ತವ್ಯದ ಪ್ರಭಾರವನ್ನು ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ಇವರಿಗೆ ವಹಿಸಬೇಕೆಂದು ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.553

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಎನ್ 20 ಸಮನ್ವಯ 2011 (ಭಾಗ), ಬೆಂಗಳೂರು, ದಿನಾಂಕ:02.05.2011**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಸೂಚನೆ ಸಂಖ್ಯೆ: ಸಿಆಸುಇ 449 ಸಅಸೇ 2010, ದಿನಾಂಕ:06.04.2011ರಲ್ಲಿ ಶ್ರೀ ಎಚ್.ಆರ್. ನಾಗೇಂದ್ರ, ಸರ್ಕಾರದ ಉಪ ಕಾರ್ಯದರ್ಶಿ, ಇವರನ್ನು ಇಂಧನ ಇಲಾಖೆಯ ಶ್ರೀಮತಿ ಪಾರ್ವತಿ ಕೇಶವಾಚಾರ್‌ರವರ ವರ್ಗಾವಣೆಯಿಂದ ತೆರವಾದ ಜಾಗಕ್ಕೆ ನೇಮಿಸಲಾಗಿರುತ್ತದೆ. ಅದರಂತೆ, ಶ್ರೀಯುತರು ದಿನಾಂಕ:11.04.2011ರಂದು ಈ ಹುದ್ದೆಯ ಕಾರ್ಯಭಾರ ವಹಿಸಿಕೊಂಡಿದ್ದಾರೆ.

ತತ್ಸಂಬಂಧ, ಶ್ರೀ ಎಚ್.ಆರ್. ನಾಗೇಂದ್ರ, ಸರ್ಕಾರದ ಉಪ ಕಾರ್ಯದರ್ಶಿ ಇವರನ್ನು ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಕಲಂ 74(ಎ) ಮತ್ತು 74(ಬಿ) ರನ್ವಯ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗಾ ಇವುಗಳ ಹಾಗೂ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಕಲಂ 72(ಎ) ಮತ್ತು 72(ಬಿ) ರನ್ವಯ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಂಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 51(ಎ) ರನ್ವಯ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.554 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಂಇ 420 ಎಎಸ್‌ಡಿ 2010, ಬೆಂಗಳೂರು, ದಿನಾಂಕ:02.05.2011

ಶ್ರೀ ಸಿ. ಪ್ರಕಾಶನ್, ನಿವೃತ್ತ ತಹಶೀಲ್ದಾರ್ ಗ್ರೇಡ್-2 (ಜೇಷ್ಠತಾ ಸಂಖ್ಯೆ: 3656) ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎಸ್.ಕೆ. ಪಾಟೀಲ್, ತಹಶೀಲ್ದಾರ್ ಗ್ರೇಡ್-2 (ಜೇಷ್ಠತಾ ಸಂಖ್ಯೆ:3658) ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 308 ಎಎಸ್‌ಡಿ 2007 ದಿನಾಂಕ:24.12.2007ರಲ್ಲಿ ತಹಶೀಲ್ದಾರ್ ಗ್ರೇಡ್-2 ವೃಂದದಿಂದ ತಹಶೀಲ್ದಾರ್ ಗ್ರೇಡ್-1 ಹುದ್ದೆಗೆ ಮುಂಬಡ್ತಿ ನೀಡಿರುವುದರಿಂದ, ಶ್ರೀ ಸಿ.ಪ್ರಕಾಶನ್, ನಿವೃತ್ತ ತಹಶೀಲ್ದಾರ್ ಗ್ರೇಡ್-2 (ಜೇಷ್ಠತಾ ಸಂಖ್ಯೆ:3656) ಇವರಿಗೂ ಸಹ ತಹಶೀಲ್ದಾರ್ ಗ್ರೇಡ್-2 ವೃಂದದಿಂದ ತಹಶೀಲ್ದಾರ್ ಗ್ರೇಡ್-1 ಹುದ್ದೆಗೆ ದಿನಾಂಕ:24.12.2007 ರಿಂದ ಜಾರಿಗೆ ಬರುವಂತೆ, ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.) ನಿಯಮಾವಳಿಗಳು 1978ರ ನಿಯಮ 2(1)(ಎ)ರಡಿಯಲ್ಲಿ ಪೂರ್ವಾನ್ವಯವಾಗಿ ಬಡ್ತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಪಿ.ಆರ್.555 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಆರ್‌ಡಿ 16 ಎಟಿಎಸ್ 2011, ಬೆಂಗಳೂರು, ದಿನಾಂಕ:03.05.2011

ಕಂದಾಯ ಇಲಾಖೆಯ ತಹಶೀಲ್ದಾರ್ ವೃಂದದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಶಿವಪ್ಪ ಲಮಾಣಿ, ತಹಶೀಲ್ದಾರ್, ಸಂಡೂರು ತಾಲ್ಲೂಕು ಇವರನ್ನು ಸಾರ್ವಜನಿಕ ಹಾಗೂ ಆಡಳಿತ ಹಿತದೃಷ್ಟಿಯಿಂದ ಈ ಕೂಡಲೇ ಜಾರಿಗೆ ಬರುವಂತೆ ವರ್ಗಾಯಿಸಲಾಗಿದೆ.

ಸದರಿ ಅಧಿಕಾರಿಯು ಸಂಡೂರು ತಾಲ್ಲೂಕಿನಿಂದ ಕೂಡಲೇ ಬಿಡುಗಡೆಗೊಂಡು ಸರ್ಕಾರದಲ್ಲಿ ವರದಿ ಮಾಡಿಕೊಳ್ಳುವುದು.

"ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ವರ್ಗಾವಣೆ ಹೊಂದಿದ ತಹಶೀಲ್ದಾರ್‌ರವರನ್ನು ಈ ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡುವುದು".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ**

ಪಿ.ಆರ್.556 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

## ಶಿಕ್ಷಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಇಡಿ 12 ಡಿಪಿಐ 2011, ಬೆಂಗಳೂರು, ದಿನಾಂಕ:02.05.2011

ಸಾರ್ವಜನಿಕ ಶಿಕ್ಷಣ ಇಲಾಖೆಯ, ಶಿಕ್ಷಣಾಧಿಕಾರಿ ಹಾಗೂ ತತ್ಸಮಾನ ವೃಂದದ ಗ್ರೂಪ್-'ಎ' ಕಿರಿಯ ವೇತನ ಶ್ರೇಣಿಯ ಈ ಕೆಳಕಂಡ ಅಧಿಕಾರಿಗಳಿಗೆ ರೂ.18150-26925ರ ಗ್ರೂಪ್-'ಎ' ಹಿರಿಯ ವೇತನ ಶ್ರೇಣಿಯ ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಹುದ್ದೆಗೆ, ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಲಾಗಿರುವ ಹುದ್ದೆ ಮತ್ತು ಸ್ಥಳಗಳಿಗೆ ನಿಯುಕ್ತಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿ ಮೂಲಕ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 1. | ಶ್ರೀ ಎಂ.ಡಿ. ಬಳ್ಳಾರಿ<br>ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಸವಣೂರು, ಹಾವೇರಿ ಜಿಲ್ಲೆ. | ಉಪ ನಿರ್ದೇಶಕರು, ಅಪರ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ (ಶ್ರೀಮತಿ ಪಿ.ಪದ್ಮಮ್ಮ, ಇವರ ಅಮಾನತ್ತಿನಿಂದ ತೆರವಾದ ಸ್ಥಳಕ್ಕೆ) |

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿ ಮೂಲಕ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 2. | ಶ್ರೀ ಬಿ.ಕೆ. ಬಸವರಾಜು, ಶಿಕ್ಷಣಾಧಿಕಾರಿ (ನಿಯೋಜನೆ) ಎ.ಎನ್.ಎಸ್.ಐ.ಆರ್.ಡಿ. ಮೈಸೂರು. | ಇವರ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಹಿಂದಕ್ಕೆ ಪಡೆಯಲಾಗಿದೆ. |
| 3. | ಶ್ರೀ ನಾಗೇಂದ್ರ ಎಸ್. ಮಧ್ಯಸ್ಥ, ಶಿಕ್ಷಣಾಧಿಕಾರಿ, ಮಧ್ಯಾಹ್ನ ಉಪಾಹಾರ ಯೋಜನೆ, ಜಿಲ್ಲಾ ಪಂಚಾಯತ್, ಉಡುಪಿ. | ಹಿರಿಯ ಕಾರ್ಯಕ್ರಮಾಧಿಕಾರಿ, ಸರ್ವ ಶಿಕ್ಷಣ ಅಭಿಯಾನ, ರಾಜ್ಯ ಯೋಜನಾ ನಿರ್ದೇಶಕರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |
| 4. | ಶ್ರೀ ಎನ್.ಎಸ್. ಕುಮಾರ್, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಶಿವಮೊಗ್ಗ. | ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ (ಖಾಲಿ ಹುದ್ದೆ) |
| 5. | ಶ್ರೀ ಎ.ಮಲ್ಲಶೆಟ್ಟಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಯರಮರಸ್, ರಾಯಚೂರು ಜಿಲ್ಲೆ. | ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಮೈಸೂರು (ಖಾಲಿ ಹುದ್ದೆ) |
| 6. | ಶ್ರೀ ಹೆಚ್.ಡಿ. ಗೋವಿಂದಯ್ಯ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಕೋಲಾರ, (ಶ್ರೀ ಪ್ರಹ್ಲಾದಗೌಡ, ಇವರ ವರ್ಗಾವಣೆಯಿಂದ ತೆರವಾದ ಸ್ಥಳಕ್ಕೆ) |

ಕ್ರಮ ಸಂಖ್ಯೆ: 2 ರಲ್ಲಿರುವ ಶ್ರೀ ಬಿ.ಕೆ. ಬಸವರಾಜು, ಇವರಿಗೆ ಪ್ರತ್ಯೇಕ ಸ್ಥಳ ನಿಯುಕ್ತಿ ಆದೇಶ ಹೊರಡಿಸಲಾಗುವುದು. ಸದರಿಯವರು ಸ್ಥಳ ನಿಯುಕ್ತಿಗಾಗಿ ಸರ್ಕಾರದಲ್ಲಿ ವರದಿ ಮಾಡಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್.557

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ಆಡಳಿತ)

## ಶಿಕ್ಷಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಇಡಿ 213 ಡಿಪಿಐ 2009, ಬೆಂಗಳೂರು, ದಿನಾಂಕ:03.05.2011

ಸಾರ್ವಜನಿಕ ಶಿಕ್ಷಣ ಇಲಾಖೆಯ, ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಯಾದ ಶ್ರೀ ಜಿ. ಭೀಮಣ್ಣ, ಹಿರಿಯ ಕಾರ್ಯಕ್ರಮಾಧಿಕಾರಿ, ಸರ್ವ ಶಿಕ್ಷಣ ಅಭಿಯಾನ, ರಾಜ್ಯ ಯೋಜನಾ ನಿರ್ದೇಶಕರ ಕಛೇರಿ, ಬೆಂಗಳೂರು ಇವರಿಗೆ ರೂ.18150-26925ರ ವೇತನ ಶ್ರೇಣಿಯ ಉಪ ನಿರ್ದೇಶಕರ ಹುದ್ದೆಯಲ್ಲಿ ಇವರಿಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಪುಟ್ಟಸ್ವಾಮಿ, ಇವರಿಗೆ ಪದೋನ್ನತಿ ನೀಡಿದ ದಿನಾಂಕ:01.09.2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ. & ಪಿ) ನಿಯಮಾವಳಿಗಳ ನಿಯಮ 2(1)(ಎ) ರನ್ವಯ ಉಪ ನಿರ್ದೇಶಕರು ಹಾಗೂ ತತ್ಸಮಾನ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್.558

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ಆಡಳಿತ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ತಿದ್ದುಪಡಿ

### ಸಂಖ್ಯೆ: ಆಕುಕ 166 ಪಿಐಎಂ 2011, ಬೆಂಗಳೂರು, ದಿನಾಂಕ:28.04.2011

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 305 ಪಿಐಎಂ 2010, ದಿನಾಂಕ:18.11.2010ರ ಕ್ರ.ಸಂ. (3)ರಲ್ಲಿ 'ಡಾ: ಎಸ್.ಆರ್. ನಾಗರತ್ನ, ಜಿಲ್ಲಾ ಆಯುಷ್ ಅಧಿಕಾರಿಗಳು, ದಾವಣಗೆರೆ ಇವರ ಜನ್ಮ ದಿನಾಂಕ:19.04.1951 ಹಾಗೂ ವಯೋನಿವೃತ್ತಿ ಹೊಂದಲಿರುವ ದಿನಾಂಕ:30.04.2011' ಎಂದು ನಮೂದಿತವಾಗಿರುವುದನ್ನು ಮಾರ್ಪಡಿಸಿದೆ ಮತ್ತು ಸದರಿ ದಿನಾಂಕಗಳ ಬದಲಾಗಿ ಸದರಿಯವರ "ಜನ್ಮ ದಿನಾಂಕ:19.05.1951 ಎಂದು ಮತ್ತು ವಯೋನಿವೃತ್ತಿ ಹೊಂದಲಿರುವ ದಿನಾಂಕ:31.05.2011" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಇನ್ನುಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಇಟಗಿ**

ಪಿ.ಆರ್.559

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)